# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ನವೆಂಬರ್ ೨೭, ೨೦೧೪ (ಮಾರ್ಗಶಿರ ೬, ಶಕ ವರ್ಷ ೧೯೩೬)<br>Bangalore, Thursday, November 27, 2014 (Margashira 6, Shaka Varsha 1936) | ಸಂಚಿಕೆ ೪೭<br>Issue 47 |
|---|---|---|


## ಭಾಗ ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ತೋಟಗಾರಿಕಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ತೋಇ 14 ರೇಉನಿ 2014, ಬೆಂಗಳೂರು, ದಿನಾಂಕ : 25-08-2014.**

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮಿತದ ಆರ್ಟಿಕಲ್ ಆಫ್ ಅಸೋಸಿಯೇಷನ್‌ನ ಅರ್ಟಿಕಲ್ 8(ಎ) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ರಾಜೀವ್ ಚಾವ್ಲ, ಭಾ.ಆ.ಸೇ., ಸರ್ಕಾರದ ಪ್ರಧಾನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ ಇವರನ್ನು ಶ್ರೀ ಭರತ್‌ಲಾಲ್ ಮೀನಾ, ಭಾ.ಆ.ಸೇ., ಹಿಂದಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ, ಇವರ ಸ್ಥಾನದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ನಿಯಮಿತದ ನಿರ್ದೇಶಕರ ಮಂಡಳಿಗೆ ನಿರ್ದೇಶಕರನ್ನಾಗಿ ಮತ್ತು ಅಧ್ಯಕ್ಷರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R.494**

**ಕೆ. ಉಮಾಪತಿ**

ಪೀಠಾಧಿಕಾರಿ,

ತೋಟಗಾರಿಕೆ ಇಲಾಖೆ (ರೇಷ್ಮೆ).

### ಸಾರಿಗೆ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಾರಿಇ 40 ಸಾಸಂಸೇ 2014, ಬೆಂಗಳೂರು, ದಿನಾಂಕ : 27-09-2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 686 ಸೇಅಸೆ 2014, ದಿನಾಂಕ : 14-08-2014ರಲ್ಲಿ ಭಾರತ ಸರ್ಕಾರದ ಸೇವೆಯಲ್ಲಿದ್ದ ಶ್ರೀ ರಾಜೇಂದರ್ ಕುಮಾರ್ ಕಠಾರಿಯಾ, ಭಾ.ಆ.ಸೇ. ಇವರನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು ಇಲ್ಲಿಯ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಗೆ ನೇಮಿಸಲು ಸದರಿಯವರ ಸೇವೆಯನ್ನು ಸಾರಿಗೆ ಇಲಾಖೆಯ ವಶಕ್ಕೆ ನೀಡಲಾಗಿದೆ.

ರಸ್ತೆ ಸಾರಿಗೆ ನಿಗಮಗಳ ಕಾಯ್ದೆ 1950ರ (ಕೇಂದ್ರದ 1950ರ 64ನೇ ಕಾಯ್ದೆ) ಕಲಂ 14(1)ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಶ್ರೀ ರಾಜೇಂದರ್ ಕುಮಾರ್ ಕಠಾರಿಯಾ, ಭಾ.ಆ.ಸೇ. ಇವರನ್ನು ಶ್ರೀ ಮಂಜುನಾಥ್ ಪ್ರಸಾದ್, ಭಾ.ಆ.ಸೇ., ಇವರ ವರ್ಗಾವಣೆಯಿಂದ ತೆರವಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಹುದ್ದೆಗೆ ನೇಮಿಸಲಾಗಿದೆ.

ಮುಂದುವರೆದು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜೇಂದರ್ ಕುಮಾರ್ ಕಠಾರಿಯಾ, ಭಾ.ಆ.ಸೇ. ಇವರನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಬೆಂಗಳೂರು, ಬೆಂಗಳೂರು

ಮಹಾನಗರ ಸಾರಿಗೆ ಸಂಸ್ಥೆ, ಬೆಂಗಳೂರು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿ ಮತ್ತು ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಗುಲ್ಬರ್ಗಾ ನಿರ್ದೇಶಕ ಮಂಡಳಿಗಳಲ್ಲಿ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 495**
**SC-50**

**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಾರಿಇ 45 ವಾಈಮ 2014, ಬೆಂಗಳೂರು, ದಿನಾಂಕ : 20-09-2014.**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ 5 ಉಪಕಲಂ (2)ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಅಮರನಾರಾಯಣ, ಭಾ.ಆ.ಸೇ. ಇವರು ವಯೋನಿವೃತ್ತಿ ಹೊಂದಿರುವುದರಿಂದ ಡಾ॥ ರಾಮೇಗೌಡ, ಭಾ.ಆ.ಸೇ. ಆಯುಕ್ತರು, ಸಾರಿಗೆ ಮತ್ತು ರಸ್ತೆ ಸುರಕ್ಷತೆ, ಬೆಂಗಳೂರು ಇವರನ್ನು ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ನಿರ್ದೇಶಕರ ಮಂಡಳಿಗೆ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 496**
**SC-25**

**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಾರಿಇ 46 ವಾಈಮ 2014, ಬೆಂಗಳೂರು, ದಿನಾಂಕ : 20-09-2014.**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ 5 ಉಪಕಲಂ (2)ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಂಜುನಾಥ್ ಪ್ರಸಾದ್, ಭಾ.ಆ.ಸೇ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ ಇವರು ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ ಶ್ರೀ ಅಂಜುಂ ಪರ್ವೇಜ್, ಭಾ.ಆ.ಸೇ. ಅಧ್ಯಕ್ಷರು, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮಕ್ಕೆ ಸಮವರ್ತಿತ ಪ್ರಭಾರದಲ್ಲಿರಿಸಿದ್ದು, ಇವರನ್ನು ಈಶಾನ್ಯ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ನಿರ್ದೇಶಕರು ಮಂಡಳಿಗೆ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 497**
**SC-25**

**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## ಸಾರಿಗೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಾರಿಇ 16 ವಾಈಸೇ 2014, ಬೆಂಗಳೂರು, ದಿನಾಂಕ : 20-09-2014.**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ 5 ಉಪಕಲಂ (2)ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು 1961ರ ನಿಯಮ 3(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಣದೀಪ್ ಡಿ. ಭಾ.ಆ.ಸೇ. ಸರ್ಕಾರದ ಉಪ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ) ಇವರ ವರ್ಗಾವಣೆಯಿಂದ ತೆರವಾದ ಸ್ಥಾನಕ್ಕೆ ಶ್ರೀಮತಿ ದೀಪ್ತಿ ಆದಿತ್ಯ ಕಾನಡೆ, ಭಾ.ಆ.ಸೇ. ಸರ್ಕಾರದ ಉಪ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ (ಆಯವ್ಯಯ ಮತ್ತು ಸಂಪನ್ಮೂಲ) ಇವರನ್ನು ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯ ನಿರ್ದೇಶಕರ ಮಂಡಳಿಗೆ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 498**
**SC-25**

**ಕೆ. ಬೀರೇಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## ಇಂಧನ ಸಚಿವಾಲಯ

### ತಿದ್ದುಪಡಿ (ಸೇರ್ಪಡೆ)

**ಸಂಖ್ಯೆ : ಇಎನ್ 216 ಸಮನ್ವಯ 2014, ಬೆಂಗಳೂರು, ದಿನಾಂಕ : 26-09-2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಇಎನ್ 216 ಸಮನ್ವಯ 2014, ದಿನಾಂಕ : 06-09-2014ರ ಮೊದಲ ಪ್ಯಾರಾದ 2ನೇ ಸಾಲಿನಲ್ಲಿ 30(1)(ಎ)ರ ನಂತರ "**ಮತ್ತು 30(1)(ಬಿ)**"ರಲ್ಲಿ ಎಂದು ಸೇರಿಸಿ ಓದಿಕೊಳ್ಳತಕ್ಕದ್ದು. ಅದೇ ರೀತಿ ಸದರಿ ಅಧಿಸೂಚನೆಯ ಮೊದಲ ಪ್ಯಾರಾದ 5ನೇ ಸಾಲಿನಲ್ಲಿ ನಿರ್ದೇಶಕರನ್ನಾಗಿ ಎಂಬ ಪದದ ನಂತರ "**ಹಾಗೂ ನಿರ್ದೇಶಕರು (ಆಡಳಿತ ಮತ್ತು ಮಾನವ ಸಂಪನ್ಮೂಲ) ರನ್ನಾಗಿ**" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 499**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಇಎನ್ 359 ಸಮನ್ವಯ 2014, ಬೆಂಗಳೂರು, ದಿನಾಂಕ : 04-09-2014.**

ಶ್ರೀ ಎಲ್.ಆರ್. ನೀಲ್ಯಾ ನಾಯಕ್, ಮುಖ್ಯ ಇಂಜಿನಿಯರ್ (ರಿಲೇ ಪರೀಕ್ಷಣಾ, ಸಂಶೋಧನೆ ಮತ್ತು ಅಭಿವೃದ್ಧಿ) ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬೆಂಗಳೂರು ಇವರನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ ಇಲ್ಲಿ ಖಾಲಿಯಿರುವ ನಿರ್ದೇಶಕರು (ತಾಂತ್ರಿಕ) ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಿ ಆದೇಶಿಸಲಾಗಿದೆ.

ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ಮೆಮೊರ್ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 74(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಲ್.ಆರ್. ನೀಲ್ಯಾ ನಾಯಕ್, ನಿರ್ದೇಶಕರು (ತಾಂತ್ರಿಕ), ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ ಇವರನ್ನು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಗುಲ್ಬರ್ಗಾ ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 500**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಇಎನ್ 368 ಸಮನ್ವಯ 2014, ಬೆಂಗಳೂರು, ದಿನಾಂಕ : 22-09-2014.**

ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಮೆಮೊರಾಂಡಂ ಆಫ್ ಅಸೋಸಿಯೇಷನ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 22(1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಪಿ.ಬಿ. ರಾಮಮೂರ್ತಿ, ಭಾ.ಆ.ಸೇ. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ (ಶ್ರೀ ಡಿ. ಸತ್ಯಮೂರ್ತಿ, ಭಾ.ಆ.ಸೇ. ಇವರ ಸ್ಥಳದಲ್ಲಿ) ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 501**

**ಎ.ಎ. ಚಪ್ಪರಬಂದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 70 ಪಿಪಿಇ 2014, ಬೆಂಗಳೂರು, ದಿನಾಂಕ : 18-09-2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 70 ಪಿಪಿಇ 2014, ದಿನಾಂಕ : 11-03-2014ರಲ್ಲಿ ಶ್ರೀ ಪಿ.ಬಿ. ಧರೆಣ್ಣವರ್, ಸರ್ಕಾರಿ ಅಭಿಯೋಜಕರು, 5ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಇವರನ್ನು ಕಾನೂನು ಅಧಿಕಾರಿ (ಹಿರಿಯ), ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಇಲ್ಲಿಗೆ ವರ್ಗಾಯಿಸಿ ನಿಯೋಜಿಸಿದ್ದನ್ನು ರದ್ದುಪಡಿಸಿ, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಸ್ಥಳದಲ್ಲೇ ಮುಂದುವರೆಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 502**

**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ).

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 263 ಪಿಪಿಇ 2014, ಬೆಂಗಳೂರು, ದಿನಾಂಕ : 30–09–2014.**

ಶ್ರೀ ಎಸ್.ಸಿ. ಚಿನಿವಾಲ, ಕಾನೂನು ಅಧಿಕಾರಿ (ಹಿರಿಯ) ಮೈಸೂರು ವಲಯ, ಮೈಸೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 285(1)ರನ್ವಯ ದಿನಾಂಕ : 30–09–2014ಕ್ಕೆ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ಸ್ವಯಂ ನಿವೃತ್ತಿ ಹೊಂದಲು ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 503

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 295 ಪಿಪಿಇ 2011, ಬೆಂಗಳೂರು, ದಿನಾಂಕ : 11–09–2014.**

ಈ ಕೆಳಕಂಡ ಅಂಕಣ (3)ರಲ್ಲಿನ ಸರ್ಕಾರಿ ಅಧಿಸೂಚನೆ/ಆದೇಶಗಳನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಸೃಜನೆಯಾದ ಅಂಕಣ (2)ರಲ್ಲಿನ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಹಿರಿಯ) ಇವರ 22 ತಾತ್ಕಾಲಿಕ ಹುದ್ದೆಗಳ ಕಾರ್ಯಾವಧಿಯನ್ನು ಸರ್ಕಾರಿ ಆದೇಶ ಸಂಖ್ಯೆ : ಒಇ 149 ಪಿಪಿಇ 2014, ದಿನಾಂಕ : 03–07–2014ರಲ್ಲಿ ದಿನಾಂಕ : 31–03–2015ರವರೆಗೆ ಮುಂದುವರೆಸಿದ್ದು, ಸದರಿ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ : 01–04–2015 ರಿಂದ ಜಾರಿಗೆ ಬರುವಂತೆ ಸರ್ಕಾರಿ ಆದೇಶ ಸಂ: ಎಫ್‌ಡಿ 58 ಎಸ್‌ಆರ್‌ಎಸ್ 79, ದಿನಾಂಕ : 27–09–1979ರ ಕಂಡಿಕೆ 2(iii)ರನ್ವಯ ಖಾಯಂ ಹುದ್ದೆಗಳೆಂದು ಘೋಷಿಸಿದೆ.

| ಕ್ರ. ಸಂ. | ಹುದ್ದೆಯ ಹೆಸರು ಮತ್ತು ಹುದ್ದೆಯು ಮಂಜೂರಾಗಿರುವ ಕಛೇರಿಯ ಹೆಸರು | ಹುದ್ದೆಯನ್ನು ಸೃಜಿಸಲಾದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| 1 | 2 | 3 |
| 1. | ಕಾನೂನು ಅಧಿಕಾರಿ (ಹಿರಿಯ),<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 73 ಪಿಪಿಇ 84, ದಿನಾಂಕ : 16–01–85 |
| 2. | ಕಾನೂನು ಅಧಿಕಾರಿ (ಹಿರಿಯ),<br>ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | ಲಾ 73 ಪಿಪಿಇ 84, ದಿನಾಂಕ : 16–01–85 |
| 3. | ಸರ್ಕಾರಿ ಅಭಿಯೋಜಕರು,<br>ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 4. | ಸರ್ಕಾರಿ ಅಭಿಯೋಜಕರು,<br>1ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 5. | ಸರ್ಕಾರಿ ಅಭಿಯೋಜಕರು,<br>2ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 6. | ಸರ್ಕಾರಿ ಅಭಿಯೋಜಕರು,<br>ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 7. | ಸರ್ಕಾರಿ ಅಭಿಯೋಜಕರು,<br>ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 8. | ಸರ್ಕಾರಿ ಅಭಿಯೋಜಕರು,<br>ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 9. | ಸರ್ಕಾರಿ ಅಭಿಯೋಜಕರು,<br>1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 10. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಡ್ಯ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |

| ಕ್ರ ಸಂ. | ಹುದ್ದೆಯ ಹೆಸರು ಮತ್ತು ಹುದ್ದೆಯು ಮಂಜೂರಾಗಿರುವ ಕಛೇರಿಯ ಹೆಸರು | ಹುದ್ದೆಯನ್ನು ಸೃಜಿಸಲಾದ ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ |
|---|---|---|
| 1 | 2 | 3 |
| 11. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಡಿಕೇರಿ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 12. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 13. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿತ್ರದುರ್ಗ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 14. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 15. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 16. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 17. | ಸರ್ಕಾರಿ ಅಭಿಯೋಜಕರು,<br>ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಗಳೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 18. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕಾರವಾರ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 19. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಿಕ್ಕಮಗಳೂರು | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 20. | ಸರ್ಕಾರಿ ಅಭಿಯೋಜಕರು,<br>ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 21. | ಸರ್ಕಾರಿ ಅಭಿಯೋಜಕರು,<br>1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |
| 22. | ಸರ್ಕಾರಿ ಅಭಿಯೋಜಕರು,<br>2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ | ಲಾ 130 ಎಲ್‌ಎಜಿ 79, ದಿನಾಂಕ : 07–10–80 |

ಸದರಿ ಅಧಿಸೂಚನೆಯನ್ನು ಆರ್ಥಿಕ ಇಲಾಖೆ ಅನಧಿಕೃತ ಟಿಪ್ಪಣಿ ಸಂ: ಆಇ 413 ವೆಚ್ಚ–11/2014, ದಿನಾಂಕ : 27–08–2014ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

P.R. 504

SC-25

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 342 ಪಿಪಿಇ 2014, ಬೆಂಗಳೂರು, ದಿನಾಂಕ : 17–09–2014.**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 2015ನೇ ಸಾಲಿನಲ್ಲಿ ಈ ಕೆಳಕಂಡ ತಃಖ್ತೆಯ ಅಂಕಣ (2)ರಲ್ಲಿ ನಮೂದಿಸಿರುವ ಅಧಿಕಾರಿಗಳ ಜನ್ಮ ದಿನಾಂಕವು ಅಂಕಣ(3)ರಲ್ಲಿ ನಮೂದಿಸಿರುವ ದಿನಾಂಕವಾಗಿರುವ ಕಾರಣ ಅಂಕಣ (4)ರಂದು ನಮೂದಿಸಿರುವ ದಿನಾಂಕಗಳಂದು ಸರ್ಕಾರಿ ಸೇವೆಯಿಂದ ವಯೋನಿವೃತ್ತಿ ಹೊಂದಲು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 95ರ ಅನುಸಾರ ಅನುಮತಿ ನೀಡಿದೆ.

| ಕ್ರ. ಸಂ. | ಅಧಿಕಾರಿಯ ಹೆಸರು, ಪದನಾಮ ಮತ್ತು ಕಛೇರಿಯ ವಿಳಾಸ ಶ್ರೀ/ಶ್ರೀಮತಿ | ಜನ್ಮ ದಿನಾಂಕ | ವಯೋನಿವೃತ್ತಿ ಹೊಂದಲು ಅನುಮತಿಸಿರುವ ದಿನಾಂಕ |
|---|---|---|---|
| 1 | 2 | 3 | 4 |
| | ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಹಿರಿಯ) | | |
| 1. | ಟಿ. ನಾಗರಾಜರೆಡ್ಡಿ,<br>ಸರ್ಕಾರಿ ಅಭಿಯೋಜಕರು, 6ನೇ ತ್ವರಿತ ಗತಿ ನ್ಯಾಯಾಲಯ, ಬೆಂಗಳೂರು ನಗರ | 05–01–1955 | 31–01–2015 |
| 2. | ಈಶ್ವರ ಐಯ್ಯಪ್ಪ ಅಡಿನ್,<br>ಸರ್ಕಾರಿ ಅಭಿಯೋಜಕರು, 2ನೇ ಅಪರ ಜಿಲ್ಲಾ ಮತ್ತು ನ್ಯಾಯಾಲಯ, ಧಾರವಾಡ | 20–02–1955 | 28–02–2015 |
| 3. | ವಾಗೀಶ್ ವಿ. ಹಿರೇಮಠ್,<br>ಸರ್ಕಾರಿ ಅಭಿಯೋಜಕರು,<br>3ನೇ ತ್ವರಿತ ಗತಿ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | 20–02–1955 | 28–02–2015 |
| 4. | ಡಿ.ಎಂ. ಕಾಮೋಜಿ,<br>ಕಾನೂನು ಅಧಿಕಾರಿ (ಹಿರಿಯ), ಬೆಂಗಳೂರು ವಿಭಾಗ, ಬೆಂಗಳೂರು | 01–03–1955 | 28–02–2015 |
| 5. | ಜಿ. ಬಸವರಾಜು,<br>ಸರ್ಕಾರಿ ಅಭಿಯೋಜಕರು, 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ (ವಿ.ನ್ಯಾ) (ಎಸ್.ಸಿ/ಎಸ್.ಟಿ), ತುಮಕೂರು | 03–03–1955 | 31–03–2015 |
| 6. | ಜೆ.ಎನ್. ದೇಸಾಯಿ,<br>ಸರ್ಕಾರಿ ಅಭಿಯೋಜಕರು, 1ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಗ್ರಾಮಾಂತರ | 24–04–1955 | 30–04–2015 |
| 7. | ಎಸ್.ಸಿ. ಚಿನಿವಾಲ್,<br>ಕಾನೂನು ಅಧಿಕಾರಿ (ಹಿರಿಯ), ಮೈಸೂರು ವಿಭಾಗ, ಮೈಸೂರು | 06–03–1955 | 31–03–2015 |
| 8. | ಎ.ಎ. ಪಾರಶೆಟ್ಟಿ,<br>ಸರ್ಕಾರಿ ಅಭಿಯೋಜಕರು, 3ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, (ಭ್ರ.ನಿ.ಕಾ), ಮೈಸೂರು | 26–05–1955 | 31–05–2015 |
| 9. | ಎಸ್.ಆರ್. ದೇಸಾಯಿ,<br>ಸರ್ಕಾರಿ ಅಭಿಯೋಜಕರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ | 27–05–1955 | 31–05–2015 |
| 10. | ಎಂ.ಎ. ತಟಗಾರ್<br>ಸರ್ಕಾರಿ ಅಭಿಯೋಜಕರು, ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಶಿವಮೊಗ್ಗ | 01–06–1955 | 31–05–2015 |
| 11. | ಕೆ.ಜಿ. ಪುರಾಣಿಕಮಠ,<br>ಸರ್ಕಾರಿ ಅಭಿಯೋಜಕರು, 3ನೇ ತ್ವರಿತಗತಿ ನ್ಯಾಯಾಲಯ, ಬೆಳಗಾವಿ | 01–06–1955 | 31–05–2015 |
| 12. | ಎಂ.ವಿ. ಭಟಪನ್ನೆ,<br>ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮಂಗಳೂರು | 27–06–1955 | 30–06–2015 |
| 13. | ಎಂ.ಹೆಚ್. ಕಬಾಡಿ,<br>ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ | 06–07–1955 | 31–07–2015 |
| 14. | ಕೆ. ರಾಮಣ್ಣ,<br>ಅಭಿಯೋಗ ಉಪ ನಿರ್ದೇಶಕರು (ಆಡಳಿತ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು | 07–09–1955 | 30–09–2015 |

| | | | |
|---|---|---|---|
| 15. | ಎಸ್.ಟಿ. ಬಿಕ್ಕಣ್ಣವರ್,<br>ಸರ್ಕಾರಿ ಅಭಿಯೋಜಕರು, 10ನೇ ಅಧಿಕ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ನಗರ | 20–09–1955 | 30–09–2015 |
| 16. | ಎಂ.ಪಿ. ಜಯಗೊಂಡ,<br>ಸರ್ಕಾರಿ ಅಭಿಯೋಜಕರು, 2ನೇ ಅಪರ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೆಳಗಾವಿ | 25–09–1955 | 30–09–2015 |
| **ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ಕಾನೂನು ಅಧಿಕಾರಿ (ಕಿರಿಯ)** | | | |
| 17. | ಬಿ. ವೀರಣ್ಣ,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಮಂಡ್ಯ | 01–06–1955 | 31–05–2015 |
| 18. | ಜಿ. ವೆಂಕಟೇಶ್,<br>ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು | 27–09–1955 | 30–09–2015 |
| **ಆಡಳಿತಾಧಿಕಾರಿಗಳು** | | | |
| 19. | ಬಿ.ಎಲ್. ವಿಜಯಕುಮಾರ್,<br>ಆಡಳಿತಾಧಿಕಾರಿಗಳು, ಕಾನೂನು ಅಧಿಕಾರಿ (ಹಿರಿಯ) ಇವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು | 10–09–1955 | 30–09–2015 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 505**

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಒಇ 289 ಪಿಪಿಇ 2013, ಬೆಂಗಳೂರು, ದಿನಾಂಕ : 28–10–2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 289 ಪಿಪಿಇ 2013, ದಿನಾಂಕ : 30–08–2013ರ ತಃಖ್ತೆಯ ಕ್ರಮ ಸಂಖ್ಯೆ 2ರ ಅಕಂಣ 2ರಲ್ಲಿ "ಅಪ್ಪಣ್ಣ ಜಟ್ಟಿ ನಾಯಕ್" ಎನ್ನುವುದರ ಬದಲು "ಅಣ್ಣಪ್ಪ ಜಟ್ಟಿ ನಾಯಕ್" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು. ಉಳಿದಂತೆ ಯಾವುದೇ ಬದಲಾವಣೆ ಇರುವುದಿಲ್ಲ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 506**

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಅಭಿಯೋಗ, ಕಾಪಿಪೋಸ ಮತ್ತು

ಪೊಲೀಸ್ ಸೇವೆಗಳು–ಬಿ).

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಒಇ 323 ಪಿಪಿಇ 2014, ಬೆಂಗಳೂರು, ದಿನಾಂಕ : 11–09–2014.**

ಸರ್ಕಾರದ ಅಧಿಸೂಚನೆ ಸಂಖ್ಯೆ : 234 ಪಿಪಿಇ 2010, ದಿನಾಂಕ : 15–04–2014ಕ್ಕೆ ಭಾಗಶಃ ಸೇರ್ಪಡೆಗೊಳಿಸಿ, ಕಾರ್ಯಹಂಚಿಕೆ ಮಾಡಿ ಸಂಖ್ಯೆ : ಒಇ 234 ಪಿಪಿಇ 2010, ದಿನಾಂಕ : 09–05–2014ರಲ್ಲಿ ಹೊರಡಿಸಲಾದ ಸರ್ಕಾರದ ಅಧಿಸೂಚನೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**P.R. 507**

**ದೇವೇಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು–ಬಿ).

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಯೋಇ 09 ಹೈಕಮಂ 2014, ಬೆಂಗಳೂರು, ದಿನಾಂಕ : 17–09–2014.**

ಶ್ರೀ ಆರ್.ಪಿ. ದೇಶಪಾಂಡೆ, ಕಾರ್ಯಪಾಲಕ ಅಭಿಯಂತರರು, ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ : ಲೋಇ 221 ಸೇಎಸು 2014, ದಿನಾಂಕ : 09–09–2014ರನ್ವಯ ಹೈದ್ರಾಬಾದ್–ಕರ್ನಾಟಕ ಪ್ರಾಂತ್ಯಾಭಿವೃದ್ಧಿ ಮಂಡಳಿ, ಗುಲ್ಬರ್ಗಾ ಇಲ್ಲಿಗೆ ನೇಮಿಸಲು ಇವರ ಸೇವೆಯನ್ನು ಯೋಜನಾ ಇಲಾಖೆಯ ವಶಕ್ಕೆ ನೀಡಲಾಗಿದೆ. ಅದರನ್ವಯ ಶ್ರೀ ಆರ್.ಪಿ. ದೇಶಪಾಂಡೆ, ಕಾರ್ಯಪಾಲಕ ಅಭಿಯಂತರರು, ಇವರನ್ನು ಮುಂದಿನ ಆದೇಶದವರೆಗೆ ಹೈದ್ರಾಬಾದ್–ಕರ್ನಾಟಕ ಪ್ರಾಂತ್ಯಾಭಿವೃದ್ಧಿ ಮಂಡಳಿ, ಗುಲ್ಬರ್ಗಾ, ಇಲ್ಲಿ ಶ್ರೀ ಖಾಜಿ ಅಬ್ದುಲ್ ಮೋಹಿತ್ ಇವರು ದಿನಾಂಕ : 30–09–2014ರಂದು ವಯೋನಿವೃತ್ತಿ ಹೊಂದಲಿರುವುದರಿಂದ ಖಾಲಿಯಾಗಲಿರುವ ಹುದ್ದೆಗೆ ಮರುಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ರಫೀ ಅಹಮದ್. ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ–1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**P.R. 508**

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59